# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1014(772)
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 10.03.2021
ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು

| ಕ್ರ. ಸಂ | ಚುಕ್ಕೆ ಗುರುತಿಲ್ಲದ ಪ್ರಶ್ನೆ | ಉತ್ತರ |
|---|---|---|
| ಅ | ಈ ವರ್ಷ ಮಳೆಗಾಲದ ಸಂದರ್ಭದಲ್ಲಿ ಬೆಳಗಾವಿಯಲ್ಲಿ ವಿಪರೀತ ಪ್ರವಾಹ ಬಂದಿದ್ದು ಇದರಿಂದ ಎಷ್ಟು ಎಕರೆ ಬೆಳೆ ಹಾನಿಯಾಗಿದೆ ; (ತಾಲ್ಲೂಕುವಾರು ಮಾಹಿತಿ ಒದಗಿಸುವುದು) | ಈ ವರ್ಷದ ಮಳೆಗಾಲದ ಸಂದರ್ಭದಲ್ಲಿ ಬೆಳಗಾವಿಯಲ್ಲಿ ವಿಪರೀತ ಪ್ರವಾಹ ಬಂದಿದ್ದು, ಇದರಿಂದ ಒಟ್ಟು 349003 ಎಕರೆ ಬೆಳೆ ಹಾನಿಯಾಗಿದ್ದು, ತಾಲ್ಲೂಕುವಾರು ಮಾಹಿತಿ ಈ ಕೆಳಗಿನಂತಿದೆ: (see table below) |

| ಕ್ರ.ಸಂ | ತಾಲ್ಲೂಕು | ಕ್ಷೇತ್ರ (ಎಕರೆ-ಗುಂಟೆ) |
|---|---|---|
| 1 | ಬೆಳಗಾವಿ | 2770-39 |
| 2 | ಖಾನಾಪೂರ | 745-17 |
| 3 | ಹುಕ್ಕೇರಿ | 8557-11 |
| 4 | ಬೈಲಹೊಂಗಲ | 91781-14 |
| 5 | ಸವದತ್ತಿ | 128308-15 |
| 6 | ರಾಮದುರ್ಗ | 50027-02 |
| 7 | ಗೋಕಾಕ | 1991-03 |
| 8 | ಕಿತ್ತೂರು | 8068-08 |
| 9 | ಮೂಡಲಗಿ | 3831-07 |
| 10 | ಚಿಕ್ಕೋಡಿ | 8495-11 |
| 11 | ರಾಯಬಾಗ | 649-22 |
| 12 | ಅಥಣಿ | 35557-25 |
| 13 | ನಿಪ್ಪಾಣಿ | 8221-13 |
| 14 | ಕಾಗವಾಡ | 0-00 |
| | **ಒಟ್ಟು** | **349003-07** |

| ಕ್ರ. ಸಂ | ಚುಕ್ಕೆ ಗುರುತಿಲ್ಲದ ಪ್ರಶ್ನೆ | ಉತ್ತರ |
|---|---|---|
| ಆ | ಈ ಜಿಲ್ಲೆಯಲ್ಲಿ ಕಳೆದ ವರ್ಷವೂ ಮಳೆ ಹಾಗೂ ಪ್ರವಾಹದಿಂದಾಗಿ ಬೆಳೆಗಳಿಗೆ ಅಪಾರ ಪ್ರಮಾಣದ ಹಾನಿಯಾಗಿದ್ದು, ಹಾನಿಯಾಗಿರುವ ಬೆಳೆಯ ವಿವರ ಒದಗಿಸುವುದು; | ಬೆಳಗಾವಿ ಜಿಲ್ಲೆಯಲ್ಲಿ ಕಳೆದ ವರ್ಷವೂ ಮಳೆ ಹಾಗೂ ಪ್ರವಾಹದಿಂದಾಗಿ ಭತ್ತ, ಸೋಯಾಬಿನ್, ಆಲೂಗೆಡ್ಡೆ, ಶೆಂಗಾ, ಹತ್ತಿ, ಗೋ.ಜೋಳ, ಜೋಳ, ಕಬ್ಬು, ತರಕಾರಿ, ರಾಗಿ, ಸಿಹಿಗೆಣಸು, ಹೆಸರುಕಾಳು, ಉದ್ದು, ಅವರೆ, ಸೂರ್ಯಕಾಂತಿ, ಈರುಳ್ಳಿ, ಬಟಾಣಿ, ಬದನೆಕಾಯಿ, ಬಿನ್ಸ್, ಕ್ಯಾಬೇಜ್, ಹಾಗಲಕಾಯಿ, ಸಜ್ಜೆ, ಟೊಮೆಟೋ, ದ್ರಾಕ್ಷಿ, ದಾಳಿಂಬೆ ಇನ್ನಿತರೆ ಬೆಳೆಗಳು ಹಾನಿಗೊಳಗಾಗಿರುತ್ತವೆ. |
| ಇ | ಪ್ರಸ್ತುತ ಜಿಲ್ಲೆಯಲ್ಲಿ ಆದ ಬೆಳೆಹಾನಿ ಪರಿಹಾರಕ್ಕೆ ಸಂಬಂಧಿಸಿದಂತೆ, ಕಳೆದ ವರ್ಷ ಹಾಗೂ ಪ್ರಸಕ್ತ ವರ್ಷದಲ್ಲಿ ವಿತರಿಸಲಾದ ಪರಿಹಾರದ ಮೊತ್ತದ ಮಾಹಿತಿ ಒದಗಿಸವುದು ; | ಬೆಳಗಾವಿ ಜಿಲ್ಲೆಯಲ್ಲಿ ಆದ ಬೆಳೆಹಾನಿ ಪರಿಹಾರಕ್ಕೆ ಸಂಬಂಧಿಸಿದಂತೆ, ಕಳೆದ ವರ್ಷದಲ್ಲಿ ರೂ.264.88 ಕೋಟಿ ಹಾಗೂ ಪ್ರಸಕ್ತ ವರ್ಷ ರೂ.75.01 ಕೋಟಿಗಳ ಮೊತ್ತವನ್ನು ರೈತರ ಬ್ಯಾಂಕ್ ಖಾತೆಗಳಿಗೆ ನೇರವಾಗಿ ಪರಿಹಾರ ತಂತ್ರಾಂಶದ ಮೂಲಕ ಜಮೆ ಮಾಡಲಾಗಿರುತ್ತದೆ. |
| ಈ | ಕಳೆದ 2019-20 ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಆದ ಬೆಳೆಗಳ ಹಾನಿ ಎಷ್ಟು ; ಈ ಹಾನಿಗೊಳಗಾದ ಎಷ್ಟು ರೈತರಿಗೆ ಪರಿಹಾರ ನೀಡಲಾಗಿದೆ ; ಇನ್ನುಳಿದ ರೈತರಿಗೆ ಯಾವ ಕಾಲಮಿತಿಯಲ್ಲಿ ಪರಿಹಾರ ಒದಗಿಸಲಾಗುವುದು ? | 2019-20ನೇ ಸಾಲಿನಲ್ಲಿ ಅತಿವೃಷ್ಟಿಯಿಂದ ಬೆಳಗಾವಿ ಜಿಲ್ಲೆಯಲ್ಲಿ 221428 ಹೆಕ್ಟರ್ ಪ್ರದೇಶದಲ್ಲಿ ಬೆಳೆ ಹಾನಿಯಾಗಿದ್ದು, 160665 ರೈತರ ಬ್ಯಾಂಕ್ ಖಾತೆಗೆ ನೇರವಾಗಿ ಇನ್‌ಪುಟ್ ಸಬ್ಸಿಡಿಯನ್ನು ಜಮೆ ಮಾಡಲಾಗಿದೆ. ಇನ್ನೂ ಪರಿಹಾರ ವಿತರಿಸುವ ಕಾರ್ಯ ಪ್ರಗತಿಯಲ್ಲಿದೆ. |

*ಕಂಇ 90 ಟಿಎನ್‌ಆರ್ 2021*

(ಆರ್. ಅಶೋಕ)
ಕಂದಾಯ ಸಚಿವರು